# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 876 (879)
2) ಸದಸ್ಯರ ಹೆಸರು : ಶ್ರೀಮತಿ ಎಸ್.ವೀಣಾ ಅಚ್ಚಯ್ಯ (ವಿಧಾನ ಸಭೆ ಕ್ಷೇತ್ರದಿಂದ ಚುನಾಯಿತರಾದವರು)
3) ಉತ್ತರಿಸುವ ದಿನಾಂಕ : 28.09.2020
4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ದಿನದಿಂದ ದಿನಕ್ಕೆ ಹುಲಿ, ಚಿರತೆ, ಕಾಡುಹಂದಿ ಸೇರಿದಂತೆ ವನ್ಯಜೀವಿಗಳ ಉಪಟಳ ಹೆಚ್ಚುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಇದರ ನಿಯಂತ್ರಣಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಕೊಡಗು ಜಿಲ್ಲೆಯಲ್ಲಿ ವನ್ಯಜೀವಿಗಳ ಹಾವಳಿಯನ್ನು ತಡೆಗಟ್ಟಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.<br>1. 51.37 ಕಿ.ಮೀ. ಸೋಲಾರ್ ತಂತಿಬೇಲಿ ನಿರ್ಮಾಣ ಮಾಡಲಾಗಿದೆ.<br>2. ಅರಣ್ಯದಂಚಿನ ಗ್ರಾಮಗಳಲ್ಲಿ ಆನೆಗಳು ಕಾಡಿನಿಂದ ನಾಡಿಗೆ ಬಾರದಂತೆ 45.41 ಕಿ.ಮೀ. ಆನೆ ತಡೆಕಂದಕ ನಿರ್ಮಾಣ ಕಾಮಗಾರಿ ಕೈಗೊಳ್ಳಲಾಗಿದೆ.<br>3. ಅರಣ್ಯದಂಚಿನ ಗ್ರಾಮಗಳಲ್ಲಿ ರೈತರಿಗೆ ಶೇಕಡ 50:50ರ ರಿಯಾಯಿತಿಯನ್ನು ಸೋಲಾರ್ ತಂತಿಬೇಲಿ ನಿರ್ಮಾಣವನ್ನು ಕೈಗೊಳ್ಳಲು ಅರಣ್ಯ ಇಲಾಖೆಯಿಂದ ಶೇಕಡ 50 ರಷ್ಟು ಸಹಾಯಧನ ನೀಡಲಾಗುತ್ತಿದ್ದು, 2020–21ನೇ ಸಾಲಿನಲ್ಲಿ 4.783 ಕಿ.ಮೀ. ಕಾಮಗಾರಿ ಪ್ರಗತಿಯಲ್ಲಿದೆ.<br>4. ಕಾಡಾನೆ ಹಾವಳಿಯನ್ನು ಪರಿಣಾಮಕಾರಿಯಾಗಿ ನಿಯಂತ್ರಿಸಲು 13.42 ಕಿ.ಮೀ. ರೈಲ್ವೆ ಹಳಿಗಳ ಬ್ಯಾರಿಕೇಡ್ ನಿರ್ಮಾಣ ಮಾಡಲು ಉದ್ದೇಶಿಸಿದ್ದು, 9.516 ಕಿ.ಮೀ. ಕಾಮಗಾರಿ ಪೂರ್ಣಗೊಂಡಿದ್ದು, ಉಳಿದ ರೈಲ್ವೆ ಬ್ಯಾರಿಕೇಡ್ ಕಾಮಗಾರಿ ಪ್ರಗತಿಯಲ್ಲಿದೆ.<br>5. ಕೊಡಗು ಜಿಲ್ಲೆಯ ಅರಣ್ಯ ವೃತ್ತದ - ವ್ಯಾಪ್ತಿಯ ವಲಯಗಳಲ್ಲಿ ಕಾಡಾನೆ ಹಾವಳಿಯನ್ನು ತುರ್ತು ನಿರ್ವಹಣೆ ಮಾಡಲು 22 ರ್‍ಯಾಪಿಡ್ ರೆಸ್ಪಾನ್ಸ್ ತಂಡಗಳನ್ನು (RRT) ರಚಿಸಿ ಕಾರ್ಯನಿರ್ವಹಿಸಲಾಗುತ್ತಿದೆ.<br>6. ಆಯ್ದ ವಲಯಗಳಲ್ಲಿ ಕಾಡಾನೆ ಹಿಮ್ಮೆಟ್ಟಿಸುವ ತಂಡಗಳ ರಚನೆ ಮಾಡಲಾಗಿದೆ.<br>7. ಕಾಡಾನೆಗಳು ಇರುವಿಕೆ, ಅವುಗಳ ಚಲನವಲನಗಳ ಬಗ್ಗೆ ಸಾರ್ವಜನಿಕರಿಗೆ, ರೈತರಿಗೆ ಮಾಹಿತಿ ನೀಡುವ SMS Alert System ಕಾರ್ಯ ನಿರ್ವಹಿಸುತ್ತಿದೆ. |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| | | 8. ವನ್ಯಪ್ರಾಣಿಗಳ ದಾಳಿಯಿಂದ ಭಾದಿತ ಗ್ರಾಮಗಳ ಜನರೊಂದಿಗೆ ಸಂಪರ್ಕ ಸಭೆಯನ್ನು ನಡೆಸಲಾಗುತ್ತಿದೆ.<br>9. ಕೊಡಗು ಜಿಲ್ಲೆಯಲ್ಲಿ 2014 ರಿಂದ ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ 13 ಕಾಡಾನೆಗಳನ್ನು ಸೆರೆಹಿಡಿದು ಸ್ಥಳಾಂತರ ಮಾಡಲಾಗಿರುತ್ತದೆ.<br>10. ಕೊಡಗು ಜಿಲ್ಲೆಯಲ್ಲಿ 9 ಆನೆಗಳಿಗೆ ರೇಡಿಯೋ ಕಾಲರ್‌ಗಳನ್ನು ಅಳವಡಿಸಿ, ಅವುಗಳ ಚಲನವಲನಗಳ ಬಗ್ಗೆ ನಿಗಾವಹಿಸಲಾಗುತ್ತಿದೆ.<br>11. ಕೊಡಗು ಜಿಲ್ಲೆಯ ನಾಗರಹೊಳೆ ವ್ಯಾಪ್ತಿಯಲ್ಲಿ ರಕ್ಷಣಾ ಕೆಲಸಗಳಿಗಾಗಿ ಎಸ್.ಟಿ.ಪಿ.ಎಫ್. ತಂಡ ನೇಮಕ ಮಾಡಿ ರಕ್ಷಣಾ ಕಾರ್ಯಗಳನ್ನು ಕೈಗೊಳ್ಳಲಾಗುತ್ತಿದೆ.<br>12. ಆದೇಶ ಸಂಖ್ಯೆ: ಅಪಜೀ 31 ಎಫ್‌ಪಿಸಿ 2016, ದಿನಾಂಕ 07.08.2017ರಲ್ಲಿ ಕೊಡಗು ಜಿಲ್ಲೆಯಲ್ಲಿ ಮಾನವ-ವನ್ಯಜೀವಿ ಸಂಘರ್ಷದಿಂದ ಭಾದಿತರಾದ ವ್ಯಕ್ತಿಗಳಿಗೆ ಸಾಮಾಜಿಕ ಮತ್ತು ಆರ್ಥಿಕ ಬೆಂಬಲ ನೀಡಲು **"ಕೊಡಗು ಮಾನವ ವನ್ಯಪ್ರಾಣಿ ಸಂಘರ್ಷ-ಉಪಶಮನ ಪ್ರತಿಷ್ಠಾನ"** ವನ್ನು ವೃತ್ತ ಮಟ್ಟದಲ್ಲಿ ಸ್ಥಾಪಿಸಲಾಗಿದೆ. |
| ಇ) | ಈ ರೀತಿ ವನ್ಯಜೀವಿಗಳ ಉಪಟಳ ಸತತವಾಗಿ ಹೆಚ್ಚುತ್ತಿರುವುದಕ್ಕೆ ಸರ್ಕಾರ ಗುರುತಿಸಿರುವ ವೈಜ್ಞಾನಿಕ ಕಾರಣಗಳೇನು; | ವನ್ಯಜೀವಿಗಳ ಉಪಟಳ ಹೆಚ್ಚುತ್ತಿರುವುದಕ್ಕೆ ಕಾರಣಗಳು ಈ ಕೆಳಕಂಡಂತಿರುತ್ತವೆ.<br>1. ಆನೆ ವಲಯ ಪ್ರದೇಶಗಳಲ್ಲಿನ ಭೂಪ್ರದೇಶದ ಬಳಕೆಯಲ್ಲಿನ ಬದಲಾವಣೆ.<br>2. ಕಾಡಂಚಿನಲ್ಲಿರುವ ತೋಟಗಳಲ್ಲಿ ಫಲಭರಿತ ಮರಗಳು, ಬೆಳೆಗಳು ಹಾಗೂ ನೀರಿನ ಸೌಕರ್ಯ ಇರುವುದರಿಂದ ವನ್ಯಜೀವಿಗಳು ರೈತರ ಜಮೀನುಗಳಿಗೆ ದಾಳಿ ಮಾಡುತ್ತಿವೆ.<br>3. ಆನೆ ವಲಯ ಪ್ರದೇಶಗಳಲ್ಲಿ ಈ ಕೆಳಕಂಡ ಕಾರಣಗಳಿಂದಾಗಿ ಅಡಚಣೆಯಾಗುತ್ತದೆ.<br>(ಅ) ಅತಿಯಾದ ವಾಹನ ಸಂಚಾರ ದಟ್ಟಣೆ ಹಾಗೂ ರಸ್ತೆಯಲ್ಲಿನ ಚಲನವಲನಗಳು.<br>(ಆ) ಹೆಚ್ಚಿನ ಸಂಖ್ಯೆಯಲ್ಲಿ ತಲೆಯೆತ್ತುತ್ತಿರುವ ಪ್ರವಾಸಿ ಚಟುವಟಿಕೆಗಳು.<br>(ಇ) ಕಾಡಾನೆಗಳು ಸಂಚರಿಸುವ ವಲಯ ಪ್ರದೇಶಗಳ ಛಿದ್ರಗೊಳ್ಳುವಿಕೆ. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಈ) | ಪ್ರತಿಯೊಂದು ವನ್ಯಜೀವಿಯ ಆಹಾರಕ್ರಮ, ಜೀವನ ಪದ್ಧತಿ ಬೇರೆಯದೇ ಆಗಿರುವುದರಿಂದ ಇವುಗಳಿಂದಾಗುವ ಉಪಟಳ ತಪ್ಪಿಸಲು ಏಕ ರೀತಿಯ ನಿಯಂತ್ರಣ ಕ್ರಮಗಳನ್ನು ಅಳವಡಿಸಿಕೊಳ್ಳುವ ಬದಲಾಗಿ ವೈಜ್ಞಾನಿಕ ಹಾಗೂ ನಿರ್ದಿಷ್ಟವಾದ ಕ್ರಮಗಳನ್ನು ಅಳವಡಿಸಿಕೊಳ್ಳುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? (ವಿವರಗಳನ್ನು ನೀಡುವುದು) | ಪ್ರತಿಯೊಂದು ವನ್ಯಜೀವಿಯ ಆಹಾರ ಕ್ರಮ, ಜೀವನ ಪದ್ಧತಿಯನ್ನಾಧರಿಸಿ ಅವುಗಳ ಸಂರಕ್ಷಣೆಗಾಗಿ ಹಾಗೂ ಮಾನವ-ವನ್ಯಪ್ರಾಣಿ ಸಂಘರ್ಷವನ್ನು ತಪ್ಪಿಸಲು ಈ ಕೆಳಕಂಡ ಪ್ರತ್ಯೇಕವಾದ ನಿರ್ದಿಷ್ಟವಾದ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br><br><u>ಆನೆ ಮತ್ತು ಇತರೆ ಸಸ್ಯಹಾರಿ ವನ್ಯಪ್ರಾಣಿ;</u><br><br>1. ರಾಜ್ಯದಲ್ಲಿರುವ ವನ್ಯಜೀವಿಗಳಿಗೆ ಸಂಪೂರ್ಣ ರಕ್ಷಣೆ ನೀಡುವ ಸಲುವಾಗಿ ರಾಷ್ಟ್ರೀಯ ಉದ್ಯಾನವನ, ಅಭಯಾರಣ್ಯ, ಹುಲಿ ಮೀಸಲು ಅರಣ್ಯ, ಸಂರಕ್ಷಿತ ಮೀಸಲು ಅರಣ್ಯಗಳನ್ನು ಘೋಷಿಸಲಾಗಿರುತ್ತದೆ.<br>2. ಅರಣ್ಯ ಪ್ರದೇಶದಲ್ಲಿ ಹುಲ್ಲುಗಾವಲು ಸಂರಕ್ಷಣೆ ಹಾಗೂ ಅಭಿವೃದ್ಧಿಗೊಳಿಸಲು 2019–20ನೇ ಸಾಲಿನಿಂದ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯಡಿ ಅರಣ್ಯ ಪ್ರದೇಶಗಳಲ್ಲಿನ ಲಂಟಾನ ಮತ್ತು ಯುಪಟೋರಿಯಂ ಕಳೆಗಳನ್ನು ಹಂತಹಂತವಾಗಿ ಕಿತ್ತು ಸ್ವಚ್ಛಗೊಳಿಸಿ ಅರಣ್ಯಕ್ಕೆ ಪೂರಕವಾದ ಹುಲ್ಲು ಬೆಳೆಯಲು ಅವಕಾಶ ಮಾಡಲಾಗಿದೆ.<br>3. ವನ್ಯಪ್ರಾಣಿಗಳಿಗಾಗಿ ಅರಣ್ಯ ಪ್ರದೇಶಗಳ ಒಳಗೆ ನೀರಿನ ಲಭ್ಯತೆ ಹೆಚ್ಚಿಸಲು ರಕ್ಷಿತಾರಣ್ಯಗಳಲ್ಲಿ ಕೆರೆಗಳ ನಿರ್ಮಾಣ ಹಾಗೂ ಪುನಶ್ಚೇತನಗೊಳಿಸಿ ವನ್ಯಪ್ರಾಣಿಗಳ ಆವಾಸಸ್ಥಾನವನ್ನು ಅಭಿವೃದ್ಧಿಗೊಳಿಸಲಾಗುತ್ತಿದೆ. ಇದರಿಂದ ಕಾಡಾನೆ ಹಾಗೂ ಇತರೆ ವನ್ಯಪ್ರಾಣಿಗಳು ಕಾಡಿನಿಂದ ಹೊರಗೆ ಬಾರದಂತೆ ನಿಯಂತ್ರಿಸಬಹುದಾಗಿದೆ.<br>4. ವನ್ಯಪ್ರಾಣಿಗಳು, ಪ್ರಮುಖವಾಗಿ ಕಾಡಾನೆಗಳು ಅರಣ್ಯ ಪ್ರದೇಶದಿಂದ ಹೊರಗೆ ಬಾರದಂತೆ ತಡೆಗಟ್ಟಲು ಅರಣ್ಯದಂಚಿನಲ್ಲಿ ಸೌರಶಕ್ತಿ ಬೇಲಿ ನಿರ್ಮಾಣ/ನಿರ್ವಹಣೆ, ಆನೆ ತಡೆಕಂದಕ ನಿರ್ಮಾಣ/ ನಿರ್ವಹಣೆ ಮಾಡಲಾಗಿದ್ದು ಮತ್ತು ಕಾಡಾನೆ ಹಾವಳಿ ಹೆಚ್ಚಿರುವ ಪ್ರದೇಶಗಳನ್ನು ಗುರುತಿಸಿ, ಉಪಯೋಗಿತ ರೈಲ್ವೆ ಹಳಿಗಳನ್ನು ಉಪಯೋಗಿಸಿ ಬ್ಯಾರಿಕೇಡ್ ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿದೆ.<br>5. ಕಳ್ಳಬೇಟೆ ತಡೆ ಶಿಬಿರಗಳಿಗೆ ಹಾಗೂ Rapid Response Teams (RRT) ಗಳನ್ನು, ಅಂದರೆ ಕಾಡಾನೆ ಹಿಮ್ಮೆಟ್ಟಿಸುವ ತಂಡಗಳನ್ನು ರಚಿಸಿ ಕಾಡಾನೆಗಳನ್ನು ಕಾಡಿಗೆ ಹಿಮ್ಮೆಟ್ಟಿಸುವ ಕಾರ್ಯ ಕೈಗೊಳ್ಳಲಾಗುತ್ತಿದೆ ಹಾಗೂ Wireless Network ಮೂಲಕ ಮಾಹಿತಿ ಸಂವಹನ ಮಾಡಲಾಗುತ್ತಿದೆ.<br>6. ಕಾಡಾನೆಗಳ ಮಾಹಿತಿಯನ್ನು ಸಂಗ್ರಹಿಸಲು 24 ಗಂಟೆ ಕಾರ್ಯನಿರ್ವಹಿಸುವ ಮಾಹಿತಿಕೇಂದ್ರ ಸ್ಥಾಪಿಸಲಾಗಿದೆ. |

| ಕ್ರ.ಸಂ | ಪ್ರಶ್ನೆ | ಉತ್ತರ |
| --- | --- | --- |
| | | 7. ಕಾಡಾನೆ ಗುಂಪಿನಲ್ಲಿದ್ದ ವಯಸ್ಕ ಹೆಣ್ಣಾನೆಯನ್ನು ಗುರುತಿಸಿ ಅದಕ್ಕೆ ರೇಡಿಯೋ ಕಾಲರ್ ಅಳವಡಿಸಿ ಆನೆಗಳ ಚಲನವಲನಗಳ ಬಗ್ಗೆ ಎಸ್.ಎಂ.ಎಸ್. ಹಾಗೂ ವಾಟ್ಸಾಪ್ ಮೂಲಕ ಜನರಿಗೆ ಮಾಹಿತಿಯನ್ನು ನೀಡಿ ಮಾನವ ಪ್ರಾಣಹಾನಿ ಹಾಗೂ ಮಾನವಗಾಯ ತಪ್ಪಿಸಲು ಕ್ರಮವಹಿಸಲಾಗುತ್ತಿದೆ.<br><br>8. ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ ಪುಂಡಾನೆಗಳನ್ನು ಗುರುತಿಸಿ, ಸೆರೆಹಿಡಿದು ಆಗಿಂದಾಗ್ಗೆ ಆನೆ ಶಿಬಿರಗಳಿಗೆ ಸ್ಥಳಾಂತರಿಸಲಾಗಿದೆ.<br><br>9. ಇತ್ತೀಚಿನ ದಿನಗಳಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಹಾನಿ ಪ್ರಕರಣಗಳಿಗೆ ಇ-ತಂತ್ರಾಂಶದ ಮೂಲಕ ಅರ್ಜಿಗಳನ್ನು ಸ್ವೀಕರಿಸಲಾಗುತ್ತಿದ್ದು, ಆಧ್ಯತೆ ಮೇರೆಗೆ ನಿಯಮಾನುಸಾರ ಪರಿಶೀಲಿಸಿ, ನೇರವಾಗಿ ಸಂತ್ರಸ್ತರ ಖಾತೆಗೆ ಹಣ ಪಾವತಿಸುವ ಪ್ರಕ್ರಿಯೆಯನ್ನು ಇ-ಪರಿಹಾರ **ತಂತ್ರಾಂಶದ** ಮೂಲಕ ನಿರ್ವಹಿಸಲಾಗುತ್ತಿದೆ.<br><br>**<u>ಚಿರತೆ:</u>** ರಾಜ್ಯದಲ್ಲಿ ಚಿರತೆ ಹಾವಳಿ ತಡೆಗಟ್ಟಲು ಎಲ್ಲಾ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಮುಂಜಾಗ್ರತಾ ಕ್ರಮವಾಗಿ ತಮ್ಮ ತಮ್ಮ ವಿಭಾಗಗಳಲ್ಲಿ 3-4 ಜನರನ್ನೊಳಗೊಂಡ ರಕ್ಷಣಾ ಪಡೆಯನ್ನು ರಚಿಸಿ, ಚಿರತೆ ಹಾವಳಿ ಪ್ರದೇಶಗಳನ್ನು ಗುರುತಿಸಿ ಜನಸಂಪರ್ಕ ಸಭೆ ನಡೆಸಲು ಹಾಗೂ ಮುಂಜಾಗ್ರತಾ ಕ್ರಮವಾಗಿ ಚಿರತೆ ಹಾವಳಿ ಇರುವ ಕಡೆ ರಾತ್ರಿ ಗಸ್ತು ಮಾಡಲು ಮತ್ತು ಚಿರತೆ ಹಿಡಿಯಲು ಬೇಕಾದ ಬೋನು, Tranquilizer Gun ಮತ್ತಿತರೆ ಉಪಕರಣಗಳನ್ನು ಸಿದ್ಧತೆ ಮಾಡಿಕೊಂಡು, ಪ್ರತಿ ವಾರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ವಲಯ ಅರಣ್ಯಾಧಿಕಾರಿಗಳೊಂದಿಗೆ ಭೇಟಿ ನೀಡಿ ಸಾರ್ವಜನಿಕರಿಗೆ ತಿಳುವಳಿಕೆ ನೀಡುವುದಲ್ಲದೆ, ಅದರಲ್ಲೂ ಕಾಡಂಚಿನಲ್ಲಿ ವಾಸಿಸುವ ಜನರಿಗೆ ಹೆಚ್ಚಿನ ತಿಳುವಳಿಕೆ ನೀಡುವಂತೆ ರಾಜ್ಯದ ಎಲ್ಲಾ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ.<br><br><u>ಹುಲಿ:</u> ರಾಜ್ಯದಲ್ಲಿ ಹುಲಿ ಹಾವಳಿ ಕಂಡು ಬಂದಂತಹ ಸಂದರ್ಭದಲ್ಲಿ ಹಾವಳಿ ತಡೆಗಟ್ಟಲು ಅರಣ್ಯಾಧಿಕಾರಿಗಳಿಗೆ ಮುಂಜಾಗ್ರತಾ ಕ್ರಮವಾಗಿ ತಮ್ಮ ತಮ್ಮ ವಿಭಾಗಗಳಲ್ಲಿ 3-4 ಜನರನ್ನೊಳಗೊಂಡ ರಕ್ಷಣಾ ಪಡೆಯನ್ನು ರಚಿಸಿ ಹಾವಳಿ ಪ್ರದೇಶಗಳನ್ನು ಗುರುತಿಸಿ ಜನ ಸಂಪರ್ಕ ಸಭೆ ನಡೆಸಲು ಹಾಗೂ ಮುಂಜಾಗ್ರತಾ ಕ್ರಮವಾಗಿ ಹಾವಳಿ ಇರುವಕಡೆ ಹಗಲು-ರಾತ್ರಿ ಗಸ್ತು ಮಾಡಲು ಮತ್ತು ಹುಲಿ ಹಿಡಿಯಲು ಬೇಕಾದ ಬೋನು, Tranquilizer Gun ಮತ್ತಿತರೆ ಉಪಕರಣಗಳನ್ನು ಸಿದ್ಧತೆ ಮಾಡಿಕೊಂಡು ಸಂಬಂಧಪಟ್ಟ ಅರಣ್ಯಾಧಿಕಾರಿಗಳು ಸ್ಥಳಕ್ಕೆ ಭೇಟಿ ನೀಡಿ ಸಾರ್ವಜನಿಕರಿಗೆ ಅರಿವು ನೀಡುವುದಲ್ಲದೆ, ಅದರಲ್ಲೂ ಕಾಡಂಚಿನಲ್ಲಿ ವಾಸಿಸುವ ಜನರಿಗೆ ಹೆಚ್ಚಿನ ತಿಳುವಳಿಕೆ ನೀಡಲಾಗುತ್ತಿದೆ. |

ಸಂಖ್ಯೆ: ಅಪಜೀ 164 ಎಫ್‌ಡಬ್ಲ್ಯೂಎಲ್ 2020

(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು